## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 796

ಸದಸ್ಯರ ಹೆಸರು : ಶ್ರೀ ನಸೀರ್ ಅಹ್ಮದ್
(ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ: : 17.09.2021

ಉತ್ತರಿಸುವ ಸಚಿವರು : ಕೃಷಿ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರೈತರ ಬೆಳೆ ತಂತ್ರಾಂಶವನ್ನು ಯಾವ ಸಂಸ್ಥೆ ಸಿದ್ಧಪಡಿಸಿದೆ. | ರೈತರ ಬೆಳೆ ಸಮೀಕ್ಷೆ ತಂತ್ರಾಂಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ-ಆಡಳಿತ)ಯು ಅಭಿವೃದ್ಧಿಪಡಿಸಿರುತ್ತದೆ. |
| ಆ | ರೈತರ ಬೆಳೆ ತಂತ್ರಾಂಶವನ್ನು ಕಾಲಕಾಲಕ್ಕೆ ಅಪ್‌ಡೇಟ್ ಮಾಡದಿರುವುದು ಮತ್ತು ಇನ್ನಿತರ ಸಮಸ್ಯೆಗಳ ಬಗ್ಗೆ ಕೃಷಿ ಇಲಾಖೆಯ ಗಮನಕ್ಕೆ ಬಂದಿದೆಯೇ; ಇದ್ದಲ್ಲಿ, ಆ ಸಮಸ್ಯೆಗಳು ಯಾವುವು; ಅವುಗಳನ್ನು ಸರಿಪಡಿಸಲು ಕೈಗೊಂಡಿರುವ ಕ್ರಮಗಳೇನು; | ಬೆಳೆ ಸಮೀಕ್ಷೆಯನ್ನು ವರ್ಷದ ಎಲ್ಲಾ ಹಂಗಾಮುಗಳಲ್ಲಿ (ಮುಂಗಾರು, ಹಿಂಗಾರು ಮತ್ತು ಬೇಸಿಗೆ) ಕೈಗೊಳ್ಳಲಾಗುತ್ತಿದ್ದು, ರೈತರು ಬೆಳೆದ ಬೆಳೆಗಳ ಹೆಸರು, ವಿಸ್ತೀರ್ಣ ಹಾಗೂ ಜಮೀನಿಗೆ ಸಂಬಂಧಪಟ್ಟಂತೆ, ಸರ್ವೆ ನಂಬರ್ ಸಮೇತ ಎಲ್ಲಾ ವಿವರಗಳನ್ನು (ಬೆಳೆ ಸಮೀಕ್ಷೆ ನಡೆಸಲು ಪ್ರತಿವರ್ಷ ಮೇ ಅಥವಾ ಜೂನ್ ಮಾಹೆಯಲ್ಲಿ ಕಾಲೋಚಿತವಾದ ದತ್ತಾಂಶವನ್ನು ಭೂಮಿ ತಂತ್ರಾಂಶದಿಂದ ಪಡೆದುಕೊಂಡು ಬೆಳೆ ಸಮೀಕ್ಷೆ ತಂತ್ರಾಂಶದಲ್ಲಿ ಅಳವಡಿಸಿಕೊಳ್ಳಲಾಗುತ್ತಿದೆ) ಕಾಲಕಾಲಕ್ಕೆ ಅಪ್‌ಡೇಟ್ ಮಾಡಲಾಗುತ್ತಿದೆ.<br>ಬೆಳೆ ಸಮೀಕ್ಷೆಯ ವಿವರಗಳು ತಪ್ಪಾಗಿರುವುದು ಕಂಡುಬಂದಲ್ಲಿ ಗೂಗಲ್ ಸ್ಟೋರ್ ಮೂಲಕ ಬೆಳೆದರ್ಶಕ ಆಪ್ ಅನ್ನು ಡೌನ್‌ಲೋಡ್ ಮಾಡಿಕೊಂಡು, ಆಪ್ ಮೂಲಕ ತಮ್ಮ ಜಮೀನಿನಲ್ಲಿ ಬೆಳೆದ ಬೆಳೆಗಳ ಬಗ್ಗೆ ದಾಖಲಿಸಿರುವ ಬೆಳೆ/ಬೆಳೆಗಳ ಮಾಹಿತಿ, ಸರ್ವೆನಂಬರ್, ವಿಸ್ತೀರ್ಣದ ಬಗ್ಗೆ ಪರಿಶೀಲಿಸಿ ಆಕ್ಷೇಪಣೆಗಳನ್ನು ಸಲ್ಲಿಸಿ, ಸರಿಪಡಿಸಿಕೊಳ್ಳಲು ಅವಕಾಶ ಕಲ್ಪಿಸಿದೆ. ಉಳಿದಂತೆ ತಾಂತ್ರಿಕವಾಗಿ ಉದ್ಭವಿಸುವ ಸಮಸ್ಯೆಗಳನ್ನು ಬೆಳೆ ಸಮೀಕ್ಷೆ ಸಹಾಯವಾಣಿ, ತಾಂತ್ರಿಕ ತಂಡದ ಮೂಲಕ ಕಾಲಮಿತಿಯಲ್ಲಿ ಪರಿಹರಿಸಿ ಕೊಡಲಾಗುತ್ತಿದೆ. |

| | | |
|---|---|---|
| ಇ | ರೈತರ ಬೆಳೆ ತಂತ್ರಾಂಶದಲ್ಲಿ ನೆಲಮಂಗಲ ತಾಲ್ಲೂಕು ಸೋಂಪುರ ಹೋಬಳಿಯಲ್ಲಿ ಯಾವ ಯಾವ ಊರುಗಳ ನಕ್ಷೆ ಮತ್ತು ಲೊಕೇಷನ್ ಗಳನ್ನು ಅಪ್‌ಡೇಟ್ ಮಾಡಲಾಗಿದೆ; (ವಿವರ ನೀಡುವುದು) | ಪ್ರಸ್ತುತ, Karnataka State Remote Sensing Apllication Centre (KSRSAC) ಸಂಸ್ಥೆಯಿಂದ ದಿನಾಂಕ:11.08.2021 ರಂದು ದೋಷಪೂರಿತ ನಕ್ಷೆಗಳ ಮಾಹಿತಿಯನ್ನು ಪಡೆಯಲಾಗಿದೆ. ಸದರಿ ಮಾಹಿತಿಯನ್ನು ಪರಿಶೀಲಿಸಿದ್ದು, ನೆಲಮಂಗಲ ತಾಲ್ಲೂಕಿನ ಸೋಂಪುರ ಹೋಬಳಿಯಲ್ಲಿನ ಎಲ್ಲಾ ಊರುಗಳ ನಕ್ಷೆ ಮತ್ತು ಲೊಕೇಷನ್ ಗಳನ್ನು ಅಪ್‌ಡೇಟ್ ಮಾಡಲಾಗಿರುತ್ತದೆ. |
| ಈ | ಸೋಂಪುರ ಹೋಬಳಿಯ ಕಾಸರಘಟ್ಟ ಮತ್ತು ಹನುಮಂತಪುರ ಗ್ರಾಮಗಳ ನಕ್ಷೆ ಮತ್ತು ಲೊಕೇಷನ್ ಅಪ್ ಡೇಟ್ ಆಗದೇ ರೈತರು ಹಲವಾರು ಸಮಸ್ಯೆ ಎದುರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದ್ದಲ್ಲಿ ಯಾವ ನಿರ್ದಿಷ್ಟ ದಿನಾಂಕದೊಳಗೆ ಎಲ್ಲಾ ಸಮಸ್ಯೆಗಳನ್ನು ಸರಿಪಡಿಸಿ ರೈತರಿಗೆ ಅನುಕೂಲ ಮಾಡಿಕೊಡಲಾಗುವುದು? (ವಿವರ ಒದಗಿಸುವುದು) | ಬಂದಿದೆ.<br><br>ಈ ಮೊದಲು 2020-21ನೇ ಸಾಲಿನಲ್ಲಿ ಸೋಂಪುರ ಹೋಬಳಿಯ ಕಾಸರಘಟ್ಟ ಮತ್ತು ಹನುಮಂತಪುರ ಗ್ರಾಮಗಳ ನಕ್ಷೆ ಮತ್ತು ಲೊಕೇಷನ್ ಅಪ್‌ಡೇಟ್ ಆಗದೇ ಇದ್ದು, ಸಮೀಕ್ಷೆ ನಡೆಸಲು ತಡೆಯುಂಟಾಗಿರುವ ಬಗ್ಗೆ ಮತ್ತು ಸದರಿ ಸಮಸ್ಯೆಯನ್ನು ಪರಿಹರಿಸಲು ಮನವಿ ಸ್ವೀಕೃತವಾಗಿರುತ್ತದೆ ಹಾಗೂ ಕೂಡಲೇ ಸಮಸ್ಯೆಯನ್ನು ಸಹ ಬಗೆಹರಿಸಲಾಗಿರುತ್ತದೆ. |

**ಸಂಖ್ಯೆ:ಕೃಇ/106/ಕೃಕೈಲು/2021**

(ಬಿ.ಸಿ.ಪಾಟೀಲ್)
ಕೃಷಿ ಸಚಿವರು